# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಹೆಚ್.ಎಂ ರೇವಣ್ಣ
ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1797
ಉತ್ತರಿಸಬೇಕಾದ ದಿನಾಂಕ : 24.03.2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಕೃಷಿ ಉತ್ಪನ್ನ ಸಹಕಾರ ಸಂಘದ ಮೇಲೆ ಸಹಕಾರ ಸಂಘ ಕಾಯ್ದೆ 64ರ ಅಡಿಯಲ್ಲಿ ವಿಚಾರಣೆಯು ಕ್ರಮ ಬದ್ಧವಾಗಿ ನಡೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಮಾಗಡಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದಲ್ಲಿ ಕಟ್ಟಡ ನಿರ್ಮಾಣದಲ್ಲಿ ನಡೆದಿರುವ ಅವ್ಯವಹಾರಗಳ ಕುರಿತು ಒಟ್ಟು 9 ಅಂಶಗಳಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ಶಾಸನಬದ್ಧ ವಿಚಾರಣೆಯನ್ನು ಸಹಕಾರ ಸಂಘಗಳ ಉಪ ನಿಬಂಧಕರು, ರಾಮನಗರ ಜಿಲ್ಲೆ, ಇವರು ಆದೇಸಿದ್ದು, ಆದೇಶ ಸಂಖ್ಯೆ: ಉನಿರಾ/ಕಲಂ 64/ವಿಚಾರಣೆ/01/2017-18 ದಿನಾಂಕ 24-04-2017 ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಪಟ್ಟಣ ತಾಲ್ಲೂಕು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ. ವಿಚಾರಣಾಧಿಕಾರಿ ವಿಚಾರಣೆ ನಡೆಸಿ, ವರದಿಯನ್ನು ದಿನಾಂಕ: 19/09/2018 ರಂದು ಸಲ್ಲಿಸಿರುತ್ತಾರೆ. ಇವುಗಳಲ್ಲಿ 2 ಆರೋಪ ಸಾಬೀತಾಗಿದ್ದು, 7 ಆರೋಪಗಳು ಸಾಬೀತಾಗಿರುವುದಿಲ್ಲ. |
| ಆ) | ಮಾಗಡಿ ತಾಲ್ಲೂಕು ಮರಿಕುಪ್ಪೆ ಕೃಷಿ ಪತ್ತಿನ ಸಹಕಾರ ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಸಿಬ್ಬಂದಿ ನೇಮಕ ಸಹಕಾರ ಕಾಯ್ದೆ 17 ಮತ್ತು 18 ರಂತೆ ಮಾಡಲಾಗಿದೆಯೇ: ಇಲ್ಲದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮವೇನು: | ಮಾಗಡಿ ತಾಲ್ಲೂಕು ಮರಿಕುಪ್ಪೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ದಿನಾಂಕ 12-04-2011 ರಂದು ಸಂಘದ ಆಡಳಿತ ಮಂಡಳಿಯವರು ನೇಮಕಾತಿ ಮಾಡಿಕೊಂಡಿರುತ್ತಾರೆ. ಸರ್ಕಾರದ ಅಧಿಸೂಚನೆ ದಿನಾಂಕ 06-6-2015 ರನ್ವಯ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960, ನಿಯಮ 17 ಮತ್ತು 18 ಕ್ಕೆ ತಿದ್ದುಪಡಿಯಾಗಿದ್ದು, ಅದರನ್ವಯ ಸಹಕಾರ ಸಂಘಗಳ ಸಿಬ್ಬಂದಿ ನೇರ ನೇಮಕಾತಿಯನ್ನು, ನೇಮಕಾತಿ ಸಮಿತಿ ರಚನೆ ಮೂಲಕ ಮತ್ತು ನಷ್ಟದಲ್ಲಿರುವ ಸಂಘಗಳು ಸರ್ಕಾರದ ಪೂರ್ವಾನುಮತಿಯೊಂದಿಗೆ ನೇಮಕಾತಿ ಮಾಡಿಕೊಳ್ಳಬೇಕಾಗಿರುತ್ತದೆ.<br>ಆದರೆ, ಸದರಿ ಸಂಘದಲ್ಲಿ ಅಧಿಸೂಚನೆ ಪೂರ್ವದಲ್ಲಿ ಸಂಘದ ಸಿಬ್ಬಂದಿ ನೇಮಕಾತಿ ಮಾಡಿಕೊಂಡಿರುತ್ತಾರೆ. |

| | | |
|---|---|---|
| ಇ) | ಮರಿಕುಪ್ಪೆ ಹಾಲು ಉತ್ಪಾದಕರ ಸಹಕಾರ ಸಂಘದ ಹಾಲು ಪರೀಕ್ಷಕರನ್ನು ನಿವೃತ್ತಿಯ 2 ವರ್ಷಗಳ ಅವಧಿಗೆ ನಿವೃತ್ತಿಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮವೇನು? | ಮರಿಕುಪ್ಪೆ ಹಾಲು ಉತ್ಪಾದಕರ ಸಹಕಾರ ಸಂಘದ ಹಾಲು ಪರೀಕ್ಷಕರಾಗಿದ್ದ ಸೀನಪ್ಪ ಇವರನ್ನು ವಯೋನಿವೃತ್ತಿಯ ಅವಧಿಯ ಮುನ್ನಾ ನಿವೃತ್ತಿಗೊಳಿಸಿರುವುದು ಇಲಾಖೆಯ ಗಮನಕ್ಕೆ ಬಂದಿರುತ್ತದೆ. ಸದರಿ ನೌಕರರನ್ನು ವಯೋ ನಿವೃತ್ತಿಯ ಅವಧಿಯ ಮೊದಲು ನಿವೃತ್ತಿಗೊಳಿಸಿರುವ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 70(2)(ಸಿ) ಪ್ರಕಾರ ದಾವಾ ಸಂಖ್ಯೆ: ದಾವಾ/44/2019-20 ಪ್ರಕರಣವನ್ನು ದಿನಾಂಕ:19-02-2020 ರಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ರವರ ನ್ಯಾಯಾಲಯಲ್ಲಿ ದಾಖಲಿಸಿದ್ದು, ಪ್ರಕರಣವು ವಿಚಾರಣಾಧೀನವಾಗಿರುತ್ತದೆ. |

**ಸಂಖ್ಯೆ: ಸಿಒ 150 ಸಿಎಲ್‌ಎಸ್ 2020**

(ಎಸ್.ಟಿ. ಸೋಮಶೇಖರ್)

**ಸಹಕಾರ ಸಚಿವರು**